ಭಾವ' ಹುಣ್ಣಿನಂತೆ ಬೆಳೆದಿರುವ ಮಹಾಬೇನೆ. ಅದು ಪರಮನಸ್ಸಿನ ಹಾಗೂ ಅಂಧಕಾರದ ಸಂಕೇತ. ಧರ್ಮ ಮತ್ತು ನೀತಿಯ ಬುನಾದಿಗೇ ಅದು ಕೊಡಲಿಪೆಟ್ಟು ಕೊಟ್ಟಿದೆ.

"ಅಸ್ಪೃಶ್ಯತೆ ಹಿಂದೂಧರ್ಮದ ಒಂದು ಅಂಗವಾಗಿರುವುದಲ್ಲದೆ ಮಾರಿಕಾಬೇನೆಯಾಗಿದೆ. ಅದನ್ನು ಎದುರಿಸುವುದು ಪ್ರತಿಯೊಬ್ಬ ಹಿಂದುವಿನ ಪವಿತ್ರ ಕರ್ತವ್ಯ. ಅದಕ್ಕೆ ಧರ್ಮದ ಮುದ್ರೆಬಿದ್ದು ಲಕ್ಷಗಟ್ಟಳೆ, ಕೋಟಿಗಟ್ಟಳೆ ಮಾನವರನ್ನು ದಾಸ್ಯದಲ್ಲಿ ಕೆಡುಹಿದೆ.

" ಪುನರ್ಜನ್ಮ ಪಡೆಯುವುದು ನನಗೆ ಇಷ್ಟವಿಲ್ಲ. ಒಂದು ವೇಳೆ ನಾನು ಪುನಃ ಹುಟ್ಟಬೇಕಾದಲ್ಲಿ ಅಸ್ಪೃಶ್ಯನಾಗಿ ಹುಟ್ಟಲು ಬಯಸುತ್ತೇನೆ. ಅವರ ದುಃಖ, ಸಂತಾಪ, ಅಪಮಾನಗಳನ್ನು ನಾನು ಅನುಭವಿಸಿ ನನ್ನ ಹಾಗೂ ಅವರ ಮುಕ್ತಿ ಸಾಧಿಸಲು ಪ್ರಯತ್ನಿಸುತ್ತೇನೆ. ನಾನು ಇನ್ನೊಮ್ಮೆ ಹುಟ್ಟಲೇ ಬೇಕಾದರೆ–' ಭಗವಂತ, ನನಗೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರಲ್ಲಿ ಜನ್ಮಕೊಡಬೇಡ; ಅತಿಶೂದ್ರರಲ್ಲಿ ಜನ್ಮಕೊಡು ' ಎಂದು ಅನನ್ಯಭಕ್ತಿಯಿಂದ ಪ್ರಾರ್ಥಿಸುತ್ತೇನೆ."

ಮಾನವನ ಕಲ್ಯಾಣ ಸಾಧಿಸದಿರುವುದನ್ನು ನಾವು ಧರ್ಮವೆಂದು ಅಂಗೀಕರಿಸಲು ಸಾಧ್ಯವಿಲ್ಲ. ಒಂದು ವರ್ಗವನ್ನೇ ನಾಯಿ, ಬೆಕ್ಕುಗಳಿಗಿಂತ ಕೀಳಾಗಿ ಕಾಣಲು ಪ್ರೇರೇಪಿಸುವ ಧರ್ಮ ಧರ್ಮವಲ್ಲ, ಅಧರ್ಮ. ಅದನ್ನು ಪರಿತ್ಯಜಿಸಿದ ಹೊರತೂ ನಮಗೆ ಧರ್ಮದ ನೆಲೆ ಸಿಕ್ಕುವುದಿಲ್ಲ.

ಧರ್ಮ, ಮಾನವತೆ, ಸಮಾಜ ಸಂಘಟನೆ, ರಾಷ್ಟ್ರದ ಐಕಮತ್ಯಗಳ ದೃಷ್ಟಿಕೋನದಿಂದ ನೋಡಿದರೆ ಅಸ್ಪೃಶ್ಯತೆಯನ್ನು ಗೌರವಿಸುವುದು ಅಸಾಧ್ಯವಾಗುತ್ತದೆ.

ಈ ಕೆಲಸ ಸಾಧಿಸುವುದೆಂತು? ಸಹಸ್ರಾರು ವರ್ಷಗಳಿಂದ ಬೆಳೆದು ಹೆಮ್ಮರವಾಗಿ ನಿಂತಿರುವ ಈ ಮಹಾವ್ಯಾಧಿಗೆ ಮದ್ದಿದೆಯೇ? ಬುದ್ಧ, ರಾಮಾನುಜ, ಬಸವ, ಕಬೀರ್, ವಿವೇಕಾನಂದ, ಬಾಪು ತೊಡೆಯಲಸಾಧ್ಯವಾದ ಕಳಂಕವನ್ನು ನಾವು ತೊಡೆದುಹಾಕಲಾಗುವುದೇ ಎನ್ನುವ ಸಮಸ್ಯೆ ನಮ್ಮ ಎದುರು ನಿಂತಿದೆ.

ಈ ಸಮಸ್ಯೆ ಸಂತರಿಂದಾಗಲಿ ಸರ್ಕಾರದಿಂದಾಗಲಿ ನಿವಾರಣೆಯಾಗುತ್ತ

ದೆಂದು ಭಾವಿಸುವುದು ಸತ್ಯಕ್ಕೆ ದೂರವಾದೀತು. ಭಾರತೀಯರು ತಮ್ಮ ಧರ್ಮವನ್ನು ಸರಿಯಾಗಿ ಅರ್ಥಮಾಡಿಕೊಳ್ಳಬೇಕು. ಪ್ರಸ್ಥಾನತ್ರಯಗಳ ಆಧಾರದ ಮೇಲೆ ಕಟ್ಟಲ್ಪಟ್ಟಿರುವ ಭಾರತ ಧರ್ಮದಲ್ಲಿ 'ಅಸ್ಪೃಶ್ಯರಿಗೆ ಪ್ರವೇಶವಿಲ್ಲ' ಎಂಬ ನಿಷೇಧವಿಲ್ಲ. ಸರ್ವಜೀವಕೋಟಿಯನ್ನೂ ಭಗವದ್ ಸ್ವರೂಪವೆಂದು ನಂಬಿ, ಪ್ರತಿಪಾದಿಸಿದ ಧರ್ಮ ಅಸ್ಪೃಶ್ಯತೆಯಂಥ ರಾಕ್ಷಸ ಪದ್ಧತಿಯನ್ನು ಮಾನ್ಯ ಮಾಡುವುದು ಶಕ್ಯವಿಲ್ಲ. ವಿಶ್ವಬಾಂಧವ್ಯ, ವಿಶ್ವ ಪ್ರೇಮವನ್ನೇ ಪ್ರತಿಪಾದಿಸುವ ವಿಶ್ವಧರ್ಮವಾದ ಭಾರತಧರ್ಮದ ಋಜು ಕಲ್ಪನೆ ಭಾರತೀಯರಲ್ಲಿ ಮೊದಲು ಬೆಳೆಯಬೇಕು. ಸವರ್ಣೀಯರು ತಮ್ಮ ಅಂತರಂಗಶುದ್ಧಿ ಮಾಡಿಕೊಂಡು ಉತ್ತಮ ಕನಿಷ್ಠವೆಂಬುದನ್ನು ಮರೆತು ಗುಣಾರಾಧಕರಾಗಬೇಕು. ಇಡಿಯ ರಾಷ್ಟ್ರ ಈ ಧೋರಣೆಯನ್ನು ತಳೆದ ಹೊರೆತೂ ಅಸ್ಪೃಶ್ಯತೆಯ ಸಮಸ್ಯೆ ಬಗೆಹರಿಯುವುದಿಲ್ಲ.

ಅಸ್ಪೃಶ್ಯರನ್ನು ಊರ ಹೊರಗಿಡಲು, ಅವರ ಸಂಪರ್ಕ ತ್ಯಜಿಸಲು ಸವರ್ಣೀಯರು ಕೆಲವು ಕಾರಣಗಳನ್ನು ಹೇಳುತ್ತಾರೆ. ಅಸ್ಪೃಶ್ಯರು ಶೊಬಚರು-ಸ್ನಾನ ಮಾಡುವುದಿಲ್ಲ. ಅಭಕ್ಷ್ಯ ಭೋಜನ ಮಾಡುತ್ತಾರೆ—ಅಪೇಯ ಪಾನ ಮಾಡುತ್ತಾರೆ! ಶೊಬಚರಾಗಿ, ಸ್ನಾನಮಾಡದೆ, ಅಭಕ್ಷ್ಯಭೋಜನ, ಅಪೇಯಪಾನ ಮಾಡುವ ಸವರ್ಣೀಯರನ್ನೇಕೆ ಶುದ್ಧರಾದವರು ಊರ ಹೊರಗಿಡುವುದಿಲ್ಲ? ಊರಿಗಿರುವ ಒಂದು ಭಾವಿಯ ಮೇಲೆ ಸವರ್ಣೀಯರು ಸರ್ವಮಾನ್ಯ ಸ್ಥಾಪಿಸಿ ಅಸ್ಪೃಶ್ಯರನ್ನು ಹೊರಗಿಟ್ಟರೆ ಅವರು ಸ್ನಾನಮಾಡುವುದಾದರೂ ಹೇಗೆ? ಮುಂಜಾನೆಯಿಂದ ಸಂಜೆಯವರೆಗೆ ದುಡಿದು, ಆಯಾಸ ಪರಿಹಾರಕ್ಕೆ ಒಂದು ಮೊಗೆ ಕಳ್ಳು ಕುಡಿವ ಅಸ್ಪೃಶ್ಯ ಸಮಾಜಬಾಹಿರ! ದಿನವೂ ಮುಖಕ್ಕೆ ಶಾಲು ಮುಚ್ಚಿಕೊಂಡು ಪಡಖಾನೆಯ ಹಿಂದೆ ಕುಳಿತು ಕಳ್ಳು ಕುಡಿಯುವ ಸವರ್ಣೀಯರೂ, ಕ್ಲಬ್ಬುಗಳಲ್ಲಿ ವಿಲಾಯಿತಿ ಮದ್ಯ ಸೇವಿಸುವ ಉತ್ತಮ ಕುಲದವರೂ ದೋಷದೂರರೇ? ಸವರ್ಣ ಹಿಂದುಗಳಲ್ಲಿ ಶಾಖಾಹಾರಿಗಳೆಷ್ಟು? ಕಾಶ್ಮೀರದ ಬ್ರಾಹ್ಮಣ ಪಂಡಿತರು ಇಂದಿಗೂ ಮಾಂಸಾಹಾರಿಗಳಾಗಿದ್ದಾರೆ—ಬಂಗಾಳದ ಬ್ರಾಹ್ಮಣರು ಮತ್ಸ್ಯವನ್ನು-'ಜಲಪುಷ್ಪ'ವೆಂದು ದಿನವೂ ಸೇವಿಸುತ್ತಾರೆ. ಅವರನ್ನೇಕೆ ಸವರ್ಣೀಯರು ಅಸ್ಪೃಶ್ಯರೆಂದು ಪರಿಗಣಿಸಿಲ್ಲ?